

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 920 |
| ಸದಸ್ಯರ ಹೆಸರು | ಡಾ॥ ಚಂದ್ರಶೇಖರ್ ಬಿ. ಪಾಟೀಲ್ (ಪದವೀಧರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 10.03.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಕಲಬುರಗಿ–ಬೀದರ್ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಇಲ್ಲಿಯವರೆಗೆ ಅಕ್ರಮ ಮರಳು ಸಾಗಾಣಿ ಸಂಬಂಧ ದಾಖಲಾದ ಕೇಸ್ ಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | ಕಲಬುರಗಿ, ಬೀದರ್ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ಅಕ್ರಮ ಮರಳು ಸಾಗಾಣಿಕೆ ಸಂಬಂಧ ದಾಖಲಾದ ಮೊಕದ್ದಮೆಗಳ ವಿವರವನ್ನು **ಅನುಬಂಧ–01** ರಲ್ಲಿ ನೀಡಲಾಗಿದೆ. |
| ಆ) | ಕಲಬುರಗಿ ಜಿಲ್ಲೆಯಲ್ಲಿ ಅಕ್ರಮ ಮರಳು ಸಾಗಾಣಿಕೆ ವೇಳೆ ವಶಕ್ಕೆ ಪಡೆದ ಮರಳಿನ ಮೌಲ್ಯ ಎಷ್ಟು; | ಕಲಬುರಗಿ ಜಿಲ್ಲೆಯಲ್ಲಿ 2020–21ನೇ ಸಾಲಿನ ಫೆಬ್ರವರಿ ಅಂತ್ಯಕ್ಕೆ ಅನಧಿಕೃತ ಮರಳು ಸಾಗಾಣಿಕೆಯಿಂದ ಒಟ್ಟು 1152.16 ಮೆಟ್ರಿಕ್ ಟನ್ ಮರಳನ್ನು ವಶಪಡಿಸಿಕೊಂಡಿದ್ದು, ಪ್ರತಿ ಮೆಟ್ರಿಕ್ ಟನ್ ಮರಳಿಗೆ ಸ್ಥಳೀಯ ಮೌಲ್ಯ ಅಂದಾಜು ರೂ.700/– ಗಳಿದ್ದು, ಒಟ್ಟು ವಶಪಡಿಸಿಕೊಂಡಿರುವ ಮರಳಿನ ಮೌಲ್ಯವು ರೂ. 8,06,512/– ಗಳಾಗಿರುತ್ತವೆ. |
| ಇ) | ಅಕ್ರಮ ಮರಳು ದಂಧೆ ತಡೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಗಟ್ಟಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>• ಅನಧಿಕೃತ ಮರಳು ಗಣಿಗಾರಿಕೆ, ದಾಸ್ತಾನು, ಸಾಗಾಣಿಕೆಯನ್ನು ತಡೆಗಟ್ಟಲು ಆಯಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮರಳು ಸಮಿತಿ ಹಾಗೂ ಉಪ ವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮರಳು ಸಮಿತಿಯನ್ನು ರಚಿಸಲಾಗಿರುತ್ತದೆ.<br>• ಸದರಿ ಸಮಿತಿಯಲ್ಲಿ ಕಂದಾಯ, ಪೊಲೀಸ್, ಅರಣ್ಯ, ಲೋಕೋಪಯೋಗಿ, ಜಿಲ್ಲಾ ಪಂಚಾಯತ್, ಗಣಿ ಮತ್ತು ಭೂವಿಜ್ಞಾನ ಹಾಗೂ ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳು ಸದಸ್ಯರುಗಳಾಗಿರುತ್ತಾರೆ. |

--2

| | | |
|---|---|---|
| | | ಸದರಿ ಇಲಾಖೆಗಳ ಅಧಿಕಾರಿಗಳಿಗೆ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಯಲು ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957ರ ಕಲಂ 4(1), 4(1-A), 21 ಮತ್ತು 22 ರಡಿ ಹಾಗೂ ಕರ್ನಾಟಕ ಉಪ ಖನಿಜ (ತಿದ್ದುಪಡಿ) ರಿಯಾಯಿತಿ ನಿಯಮಗಳು, 2016ರ ನಿಯಮ 31-Rರ ಉಪ ನಿಯಮ 13 ರಡಿ ಸಂಬಂಧಪಟ್ಟ ಪೊಲೀಸ್ ಠಾಣೆಗಳಲ್ಲಿ ಹಾಗೂ ನ್ಯಾಯಾಲಯಗಳಲ್ಲಿ ಮೊಕದ್ದಮೆ ದಾಖಲಿಸಲು ಅಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.<br>• ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲು ಜಿಲ್ಲಾ ಮರಳು ಉಸ್ತುವಾರಿ ಸಮಿತಿಗಳಿಂದ ರಾಜ್ಯದಲ್ಲಿ ಆಯಕಟ್ಟಿನ ಪ್ರದೇಶಗಳಲ್ಲಿ ಮರಳು ತನಿಖಾ ಠಾಣೆಗಳನ್ನು ತೆರೆದು ಕಾರ್ಯ ನಿರ್ವಹಿಸಲಾಗುತ್ತಿದೆ.<br>• ಅಲ್ಲದೆ ಆಯಾ ಜಿಲ್ಲಾ ವ್ಯಾಪ್ತಿಗಳಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಚಾಲಿತ ದಳವನ್ನು ರಚಿಸಿಕೊಂಡು ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲಾಗುತ್ತಿದೆ.<br>• ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳಡಿ ಸಂಗ್ರಹಿಸಲಾದ ದಂಡದ ಮೊತ್ತ ಹಾಗೂ ದಾಖಲಿಸಲಾದ ಮೊಕದ್ದಮೆಗಳ ವಿವರಗಳು ಈ ಕೆಳಕಂಡಂತಿವೆ. |

(ರೂ. ಲಕ್ಷಗಳಲ್ಲಿ)

| ವರ್ಷ | ಅನಧಿಕೃತ ಮರಳು ಗಣಿಗಾರಿಕೆ | | | ಅನಧಿಕೃತ ಮರಳು ಸಾಗಾಣಿಕೆ | | |
|---|---|---|---|---|---|---|
| | ಪತ್ತೆ ಹಚ್ಚಿದ ಪ್ರಕರಣಗಳ ಸಂಖ್ಯೆ | ವಸೂಲಾದ ದಂಡ | ದಾಖಲಿಸಿದ ಮೊಕದ್ದಮೆಗಳ ಸಂಖ್ಯೆ | ಪತ್ತೆ ಹಚ್ಚಿದ ಪ್ರಕರಣಗಳ ಸಂಖ್ಯೆ | ವಸೂಲಾದ ದಂಡ | ದಾಖಲಿಸಿದ ಮೊಕದ್ದಮೆಗಳ ಸಂಖ್ಯೆ |
| 2018-19 | 191 | 54.62 | 106 | 3361 | 375.57 | 2584 |
| 2019-20 | 240 | 128.81 | 106 | 2676 | 271.01 | 1866 |
| 2020-21 (ಜನವರಿ 2021 ರ ಅಂತ್ಯಕ್ಕೆ) | 85 | 32.68 | 35 | 628 | 80.74 | 318 |

ಸಂಖ್ಯೆ ಸಿಐ 167 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.

ಅನುಬಂಧ-1

ಕಲಬುರಗಿ , ಬೀದರ್ ಮತ್ತು ಯಾದಗಿರಿ ಜಿಲ್ಲೆಗಳ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಅನಧಿಕೃತ ಮರಳು ಸಾಗಾಣಿಕೆಯಡಿಯಲ್ಲಿ ಸಂಗ್ರಹಿಸಲಾದ ದಂಡದ ಮೊತ್ತ ಮತ್ತು ದಾಖಲಾದ ಮೊಕದ್ದಮೆಗಳ ವಿವರಗಳು.

| ಕ್ರ. ಸಂ | ಜಿಲ್ಲೆ | 2018-19 | | 2019-20 | | 2020-21 (ಫೆಬ್ರವರಿ-2021ರ ಅಂತ್ಯಕ್ಕೆ) | |
|---|---|---|---|---|---|---|---|
| | | ಸಂಗ್ರಹಿಸಲಾದ ದಂಡದ ಮೊತ್ತ (ರೂ.ಲಕ್ಷಗಳಲ್ಲಿ) | ದಾಖಲಿಸಿದ ಮೊಕದ್ದಮೆ ಸಂಖ್ಯೆ | ಸಂಗ್ರಹಿಸಲಾದ ದಂಡದ ಮೊತ್ತ (ರೂ.ಲಕ್ಷಗಳಲ್ಲಿ) | ದಾಖಲಿಸಿದ ಮೊಕದ್ದಮೆ ಸಂಖ್ಯೆ | ಸಂಗ್ರಹಿಸಲಾದ ದಂಡದ ಮೊತ್ತ (ರೂ.ಲಕ್ಷಗಳಲ್ಲಿ) | ದಾಖಲಿಸಿದ ಮೊಕದ್ದಮೆ ಸಂಖ್ಯೆ |
| 1. | ಬೀದರ್ | 13.00 | 04 | 19.95 | 0 | 19.00 | 10 |
| 2. | ಕಲಬುರಗಿ | 85.00 | 296 | 08.35 | 237 | 16.33 | 109 |
| 3. | ಯಾದಗಿರಿ | 0.22 | 225 | 01.50 | 146 | 19.76 | 77 |
| ಒಟ್ಟು | | **98.22** | **525** | **29.80** | **383** | **55.09** | **196** |

Deputy Director (Min. Admn)
Dept. of Mines & Geology
Bangalore-560001

CI 67 MMN 2021